# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ಸದಸ್ಯರ ಹೆಸರು : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀದರರ ಕ್ಷೇತ್ರ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1464
ಪ್ರಶ್ನೆಗೆ ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸಬೇಕಾದ ದಿನಾಂಕ : 18.03.2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಾಗಲಕೋಟೆ ಜಿಲ್ಲೆಯ ಕೂಡಲಸಂಗಮ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಅಕ್ಷರಧಾಮ ಮಾದರಿಯಲ್ಲಿ ವಸ್ತುಸಂಗ್ರಹಾಲಯವನ್ನು ಅಭಿವೃದ್ಧಿಪಡಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ. | ಕೂಡಲಸಂಗಮ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಅಕ್ಷರಧಾಮ ಮಾದರಿಯಲ್ಲಿ ಬಸವ ಅಂತಾರಾಷ್ಟ್ರೀಯ ಕೇಂದ್ರ ನಿರ್ಮಾಣಕ್ಕಾಗಿ ಹೆಚ್ಚುವರಿ ಕಟ್ಟಡ ಕಾಮಗಾರಿಗಳಿಗೆ ಟೆಂಡರ್ ಕರೆದು, ಮೇ: ಕೆ.ಎಂ.ವ್ಹಿ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು/ ಹೈದ್ರಬಾದ ಇವರಿಗೆ ಕಾರ್ಯಾದೇಶವನ್ನು ನೀಡಲಾಗಿದೆ. ಕಾಮಗಾರಿಗಳು ಪ್ರಾರಂಭವಾಗಿದ್ದು, ಕೆಲಸ ಪ್ರಗತಿಯಲ್ಲಿದೆ ಮತ್ತು ಜುಲೈ 2020ರ ಅಂತ್ಯಕ್ಕೆ ಪೂರ್ಣಗೊಳ್ಳಬೇಕಿದೆ. |
| ಆ | ಪೂರ್ಣವಾಗದೇ ಇದ್ದಲ್ಲಿ, ವಿಳಂಬವಾಗಿರುವುದಕ್ಕೆ ಕಾರಣಗಳೇನು; | ಮ್ಯೂಜಿಯಂ ಕಟ್ಟಡದ ವಾಸ್ತುಶಿಲ್ಪ ನಕ್ಷೆಗಳಿಗೆ ಮುಖ್ಯ ವಾಸ್ತು ಶಿಲ್ಪಿಯವರಿಂದ ದಿನಾಂಕ: 03.08.2018 ರಂದು ಅನುಮೋದನೆ ದೊರೆತ ಕಾರಣ ಕಾಮಗಾರಿಯಲ್ಲಿ ವಿಳಂಬವಾಗಿದೆ. ಪ್ರಸ್ತುತ ಕಾಮಗಾರಿ ಪ್ರಗತಿಯಲ್ಲಿದೆ. |
| ಇ | ಈ ಯೋಜನೆಯ ಉಸ್ತುವಾರಿಗೆ ಕಲಾ ಸಂಶೋಧಕರನ್ನು ನೇಮಕ ಮಾಡಲಾಗಿದೆಯೇ; ಇಲ್ಲವಾದಲ್ಲಿ, ನೇಮಕ ಮಾಡದೇ ಇರಲು ಕಾರಣಗಳೇನು; | ಹೌದು. ಸರ್ಕಾರದ ಆದೇಶ ಸಂಖ್ಯೆ: ಕಂಇ 14 ಆರ್‌ಇಹೆಚ್ 2019, ದಿನಾಂಕ: 12.02.2020ರ ಮೂಲಕ ಸದರಿ ಯೋಜನೆಗೆ ತಜ್ಞರ ಸಲಹಾ ಸಮಿತಿಯನ್ನು ರಚಿಸಲಾಗಿದೆ. |
| ಈ | ಸದರಿ ಯೋಜನೆಗಾಗಿ ಎಷ್ಟು ಅನುದಾನವನ್ನು ನೀಡಲಾಗಿದೆ; | ಸದರಿ ಯೋಜನೆಗೆ ₹.76.05 ಕೋಟಿ ಅನುದಾನ ನೀಡಲಾಗಿದೆ. |
| ಉ | ಪ್ರಸ್ತುತ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ ? | ಸರ್ಕಾರದ ಆದೇಶ ಸಂಖ್ಯೆ: ಜಸಂಇ 227 ಕೆಬಿಎನ್ 2016, ದಿನಾಂಕ: 13.07.2017ರಲ್ಲಿ ಸಿವ್ಹಿಲ್ ಕಾಮಗಾರಿಗಳಿಗೆ ₹59.37 ಕೋಟಿ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಂಇ 91 ಆರ್‌ಇಹೆಚ್ 2015, ದಿನಾಂಕ: 03.03.2017ರಲ್ಲಿ ಬಸವ ಅಂತರಾಷ್ಟ್ರೀಯ ಕೇಂದ್ರದ ಆಂತರಿಕ ಕಾಮಗಾರಿಗಳಾದ ಮ್ಯೂಸಿಯಮ್ ಚಿತ್ರಕಲೆ, ಶಿಲ್ಪಕಲೆ, 3ಡಿ ತಂತ್ರಜ್ಞಾನ ಮತ್ತು ಡಯರಾಮ ಮುಂತಾದ ಕಾಮಗಾರಿಗಳಿಗಾಗಿ, ₹.16.68 ಕೋಟಿ, ಒಟ್ಟು ₹76.05 ಕೋಟಿ ಅನುದಾನ ಬಿಡುಗಡೆಯಾಗಿರುತ್ತದೆ. |

**ಸಂಖ್ಯೆ: ಕಂಇ 24 ಆರ್‌ಇಹೆಚ್ 2020**

(ಆರ್. ಅಶೋಕ)
ಕಂದಾಯ ಸಚಿವರು